ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ಸೋಮವಾರ, ದಿನಾಂಕ: 16ನೇ ಮಾರ್ಚ್, 2020

ಐ.ಟಿ.ಬಿ.ಟಿ. ಕಂಪನಿಗಳನ್ನು ಜಿಲ್ಲಾ ಕೇಂದ್ರಗಳಲ್ಲಿ ತೆರೆಯುವ ಕುರಿತು

ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

967 (1038) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರಿನಲ್ಲಿರುವ ಐ.ಟಿ. ಮತ್ತು ಬಿ.ಟಿ. ಉದ್ಯಮಗಳ ಸಂಖ್ಯೆ ಎಷ್ಟು ; ಅವು ಯಾವುವು ; ಸಂಪೂರ್ಣ ವಿಳಾಸ, ದೂರವಾಣಿ ಸಂಖ್ಯೆ ಮತ್ತು ಆ ಕಂಪನಿ ಮಾಲೀಕರ ಹೆಸರು ಸಮೇತವಾಗಿ ಮಾಹಿತಿ ನೀಡುವುದು ;

(ಆ) ಈ ಕಂಪನಿಗಳಿಗೆ ಭೂಮಿ/ನೀರು/ವಿದ್ಯುತ್ ಮತ್ತು ಇತರೆ ಸೌಲಭ್ಯಗಳನ್ನು ಅತ್ಯಂತ ಕಡಿಮೆ ದರದಲ್ಲಿ ನೀಡಲಾಗಿದೆಯೇ ; ಮತ್ತು ತೆರಿಗೆಯಲ್ಲಿ ವಿನಾಯಿತಿ ನೀಡಲಾಗಿದೆಯೇ ; ಸಂಪೂರ್ಣ ವಿವರದೊಂದಿಗೆ ಮಾಹಿತಿ ನೀಡುವುದು ;

(ಇ) ಈ ರೀತಿ ತೆರಿಗೆ ವಿನಾಯಿತಿ/ಕಡಿಮೆ ದರದಲ್ಲಿ ಸೌಲಭ್ಯಗಳನ್ನು ನೀಡಿರುವುದರಿಂದ ರಾಜ್ಯ ಸರ್ಕಾರದ ಆದಾಯಕ್ಕೆ ಆಗಿರುವ ಒಟ್ಟು ನಷ್ಟ ಎಷ್ಟು ; ವಿವರವಾದ ಮಾಹಿತಿ ಒದಗಿಸುವುದು ;

(ಈ) ಈ ಉದ್ಯಮಗಳಲ್ಲಿ ಕೆಲಸ ಮಾಡುತ್ತಿರುವ ಒಟ್ಟು ಅಧಿಕಾರಿ/ನೌಕರರ ಸಂಖ್ಯೆ ಎಷ್ಟು ; ಮತ್ತು ಕರ್ನಾಟಕ/ಕನ್ನಡದ ಅಧಿಕಾರಿ/ ನೌಕರರ ಸಂಖ್ಯೆ ಎಷ್ಟು ; (ಮಾಹಿತಿ ನೀಡುವುದು)

(ಉ) ರಾಜ್ಯದ ರಾಜಧಾನಿಗೆ ಹತ್ತಿರವಿರುವ ಇತರೆ ಜಿಲ್ಲೆಗಳಲ್ಲಿ ಈ ಉದ್ಯಮಗಳನ್ನು ಸ್ಥಾಪಿಸುವಂತೆ ಖಾಸಗಿಯವರಿಗೆ ಪ್ರೋತ್ಸಾಹಿಸಲು ಸರ್ಕಾರಕ್ಕಿರುವ ತೊಂದರೆ ಏನು ; (ವಿವರ ನೀಡುವುದು)

(ಊ) ಬೆಂಗಳೂರಿನಲ್ಲಿ ಮಿತಿ ಮೀರಿ ಬೆಳೆಯುತ್ತಿರುವ ಜನಸಂಖ್ಯೆ ಮತ್ತು ಟ್ರಾಫಿಕ್ ಸಮಸ್ಯೆಗಳಿರುವುದರಿಂದ ಮತ್ತು ಬೇರೆ ಜಿಲ್ಲೆಗಳಿಂದ ಜನರು ವಲಸೆ ಬರುವುದನ್ನು ತಪ್ಪಿಸುವ ಸಲುವಾಗಿ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರುವ ರಾಜಧಾನಿಗೆ ಹತ್ತಿರವಿರುವ ತುಮಕೂರು, ಹಾಸನ, ಮಂಡ್ಯ, ಮೈಸೂರು, ಶಿವಮೊಗ್ಗ, ಮಂಗಳೂರು, ಬೆಳಗಾಂ ಮತ್ತು ಧಾರವಾಡದಂತಹ ಜಿಲ್ಲೆಗಳಲ್ಲಿ ಇಂತಹ ಉದ್ಯಮಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳುವುದೇ ? (ವಿವರ ನೀಡುವುದು)